

ವೈ. ಅಕೀಮ್
ಕೈಲಾಗದ ಮೈಗಳ್ಳ!



ಕೇಳಿರುವಿರ ನೀವೀ ಕಥೆಯ
ನಾಲ್ಕನೆ ನಂಬರ್ ಮನೆ ಕಥೆಯ?
ಅಂಚೆಯವನು ಒಮ್ಮೆ ಅಲ್ಲಿ
ಅಸಾಮಾನ್ಯ ಪತ್ರ ಹಿಡಿದು
ಹೋಗುತಿದ್ದ ವ್ಯರ್ಥವಾಗಿ
ಬಾಗಿಲಿಂದ ಬಾಗಿಲಿಗೆ.

ಅವ ಹಿಡಿದ ಲಕೋಟೆ ಸುಕ್ಕುಸುಕ್ಕಾಗಿತ್ತು.
ಅದರ ಗೆರೆಗಳ ಮೇಲೆ
ವಿಳಾಸ ಹೀಗಿತ್ತು:
"ಕೈಲಾಗದ ಮೈಗಳ್ಳನಿಗೆ" ಎಂದು ಬರೆದಿತ್ತು.



ಅಂಚೆಯವ ನಿಂತ
ಮೊದಲ ಮಹಡಿಯ
ನಿವಾಸದ ಮುಂದೆ.
ಬಾಗಿಲಿಂದಲೆ ಕಾಣುತಿದ್ದ ವೋವ.
ಒಂದೊಂದು ಚಮಚ ಸಾರಿಗೂ
ಹೇಳುತ್ತಿದ್ದಳು ಅಮ್ಮ ಒಂದೊಂದು ಕಥೆಯ.

"ಕೈಲಾಗದ ಮೈಗಳ್ಳ,
ಹಿಡಿ ನಿನ್ನ ಕಾಗದ.
ನಾನೇನು ಮಾಡಲಿ; ಇದು ನಿನಗೆ ಬರೆದಿದೆ"
ಎಂದಂದು ಅಂಚೆಯವ ಕಾಗದವ ನೀಡಿದ.

ಬೆಚ್ಚುತ ಕಿತ್ತ ಚಮಚವ
ತಾಯಿ ಕೈಯಿಂದ ವೋವ.
"ಮೈಗಳ್ಳ ಇಲ್ಲಿಲ್ಲ"
ತಾಯಿ ಉತ್ತರಿಸಿದಳು.
ಅಂಚೆಯವ ಅಲ್ಲಿಂದ ಹೋಗಬೇಕಾಯ್ತು.

ಆಂದ್ರೇಯ್‌ನ ನಿವಾಸ
ವೋವನ ನಿವಾಸದ ಮೇಲಿನದು.
ಅವನ ಕೋಣೆಯದೊಂದು
ಹೊಲಸು ಕಲಸು.
ಹರಡಿದ್ದವಲ್ಲಿ ಆಟಿಕೆಗಳೆಲ್ಲೆಲ್ಲೂ
ಹರಕು ಮುರುಕು.

"ನಾನಲ್ಲ ಮೈಗಳ್ಳ !"
ಅವನೆಂದ ನಿಂತು,
ಕಾಗದದ ವಿಳಾಸವನು
ಕೇಳಿದಾಕ್ಷಣವೆ.

"ಮರದ ತುಂಡುಗಳಿಂದ
ಮನೆಯ ಕಟ್ಟುವುದನ್ನು
ಮುಗಿಸಿದಾಕ್ಷಣ ನಾನು
ಇರಿಸುವೆನು ತಿರುಗಿ
ಆಟಿಕೆಗಳೆಲ್ಲವನು
ಪೆಟ್ಟಿಗೆಯ ಒಳಗೆ."



ಅಂಚೆಯುವ ಹಿಂದಕೆ ತಿರುಗಿ
ಎದುರು ನಿವಾಸದ
ಬಾಗಿಲನು ತಟ್ಟಿದನು.
ಸ್ಲಾವನ ನಿವಾಸವದು,
ಅದರ ನಂಬರು ಇತ್ತು
ಇಪ್ಪತ್ತು ನಾಲ್ಕು.



ಅವನ ತಂಗಿಯು ಅವಗೆ
ತೊಡಿಸುತಿದ್ದಳು ಅವನ
ಕಾಲುಚೀಲವನು.
ಸ್ಲಾವನು ಆಕಳಿಸಿ
ಕೆರೆದು ಕೊಳ್ಳುತ್ತಿದ್ದ
ತನ್ನ ಗಲ್ಲವನು.

"ಓಹ್, ಸಿಕ್ಕಿದನು, ಸಿಕ್ಕಿದನು
ಕೊನೆಗೂ ಸಿಕ್ಕಿದನು"
ಅಂಚೆಯುವ ಹೇಳಿದನು,
"ಕೈಲಾಗದ ಮೈಗಳ್ಳ ನೀನೆ ಎಂದು
ನೋಡಿದಾಕ್ಷಣ ಸ್ಪಷ್ಟವಾಗುತಿಹುದು."






ಅಂಚೆಯವ ಹೇಳಿದುದ
ಕೇಳಿ ಕೂಡಲೆ ಸ್ಲಾವ
ತಲೆಯಾಡಿಸಿದ ಬೇಗಬೇಗ,
ಕಾಲುಚೀಲವ ತೊಟ್ಟ ತಾನೆ.
"ನಿಮ್ಮ ಭಾವನೆ ತಪ್ಪು, ಶುದ ತಪ್ಪು.
ಹಾಕಿಕೊಳ್ಳುವೆ ನಾನೇ
ನನ್ನ ಬಟ್ಟೆಯನು.
ಹೇಳಿಕೊಡುತಿಹೆನಷ್ಟೆ
ನನ್ನ ತಂಗಿಗೆ ಇಂದು
ಇತರರಿಗೆ ನೆರವಾಗುವ
ರೀತಿಯನ್ನು."

ಕೆಲವು ಹೆಜ್ಜೆಯನಷ್ಟೆ
ಇಟ್ಟು ಅಂಚೆಯವ
ತಲುಪಿದನು ಮುಂದಿನ ಬಾಗಿಲನ್ನು.
ಬಂದಿತವನಿಗೆ ಅಲ್ಲಿ ಉತ್ತರ
ನೇರ ಅಡಿಗೆಮನೆಯಿಂದ.
ಪಾತ್ರೆಗಳ ತೊಳೆದೆಲ್ಲ ಅಲ್ಲಿ
ಇರಿಸಲಾಗುತ್ತಿತ್ತು ಒಂದರಮೇಲೊಂದು.
ತಾಯಿ — ಮಗಳಿಬ್ಬರೂ
ಒರಸುತಿದ್ದರು ಎಲ್ಲವನ್ನೂ.

ಅಂಚೆಯವ ಬಿಸುಸುಯ್ದು
ಹಲ್ಲು ಕಿರಿಯುತ್ತೆಂದ:
"ಕ್ಷಮಿಸಿ, ತಪ್ಪಾಯ್ತು,
ನನ್ನೆಣಿಕೆ ಮತ್ತೆ ತಪ್ಪಾಯ್ತು."



ಅಲೆದಲೆದು ಸಾಕಾಗಿ
ಅಂಚೆಯವ ಕೊನೆಗೆ
ಉದ್ಯಾನದಲಿ ಕುಳಿತ
ವಿಶ್ರಾಂತಿಗೆಂದು.

ಅಲ್ಲವನು ಕಂಡ
ಬೋರಿಸ್ಸನನ್ನು
ಮನೆಯಲ್ಲಿ ಕಾಣದಿದ್ದ
ಬಾಲಕನೊಬ್ಬನನ್ನು.
ಅವನಲ್ಲಿ ಗಿಡಗಳಿಗೆ
ನೀರೆರೆಯುತಿದ್ದ,
ಹೂ ಎಲ್ಲ ಬೆಳೆದಿತ್ತು ಸುತ್ತಮುತ್ತ.

ಪಾಪ, ಕೊನೆಗೂ ಸಿಕ್ಕಲಿಲ್ಲ,
ಅಂಚೆಯವನಿಗೆ ಎಲ್ಲೂ
ಕಾಣಬರಲಿಲ್ಲ ಆ
ಕೈಲಾಗದ ಮೈಗಳ್ಳ !
ಅವಗಾಗಿ ಶೋಧೆಯನು
ಮುಂದುವರೆಸುವ ಮುನ್ನ
ಅಂಚೆಯವ ಕುಳಿತ
ಮರದ ಕೆಳಗಿನ ಒಂದು ಬೆಂಚಮೇಲೆ.



# ನಾಚಿಕೆಯಾಗಲಿ ಮೈಗಳ್ಳನಿಗೆ!

ಕಾಗದವು ಹೋಗಿಬಂದಿತ್ತು
ಹಿಂದಕೂ ಮುಂದಕೂ ಹಲವಾರು ಬಾರಿ.
ಅದರೊಳಗೆ ಬರೆದುದನು
ತಿಳಿಯ ಬಯಸುವಿರಾ?
ಹೇಳುವೆನು ಕೇಳಿ.

ಅದರಲ್ಲಿ ಬರೆದಿತ್ತು
ಒಂದೇ ಸಾಲು.
"ನಾಚಿಕೆಯಾಗಲಿ ಮೈಗಳ್ಳನಿಗೆ!"
ಎಂದಿತ್ತು ಒಕ್ಕಣೆ.

ಹಾಗೆನಿಸಿಕೊಳ್ಳಲು
ಯಾರಿಗಿಷ್ಟ?
ಮೈಗಳ್ಳರಾಗಲು
ಯಾರಿಗಿಷ್ಟ?

ಆದ್ದರಿಂದಲೇ ನಾನು
ಹೇಳುವೆನು ಕೇಳಿ,
ಪುಟ್ಟಾಣಿಗಳೆ ನಿಮ್ಮಿಂದ
ಅಗಲುವಾ ಮುನ್ನ.

ಈ ಪತ್ರವೀ ರೀತಿ
ಸಂಚರಿಸುತಲೆ ಇರಲಿ
ವರ್ಷವರ್ಷಗಳುರುಳಿ ಹೋಗುತಿರಲಿ,
ಈ ನನ್ನ ಆಶಯಕೂ ಕೊನೆ ಇಲ್ಲದಿರಲಿ.

